

ಸಂಸ್ಥಾಪಕರು: ಪ್ರೊ. ಎಂ.ವಿ. ಸೀತಾರಾಮಯ್ಯ



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

| | | | | |
|---|---|---|---|---|
| ಂಪುಟ: ೦೨ ಸಂಚಿಕೆ: ೦೮ | ನವೆಂಬರ್ ೨೦೧೫ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
| 'ol. 02 !ssue 08 | November 2015 | Pages - 8 | A. Sub. - Rs. 20/- | Editor : Sri. B.R. Ravindranath |





**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/-

ಐದು ವರ್ಷಗಳ ಚಂದಾ
ರೂ. ೧೦೦/-



ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com


## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಅಕ್ಟೋಬರ್2015 ತಿಂಗಳಿನಲ್ಲಿ ನಡೆದ ಕಾರ್ಯಕ್ರಮಗಳು

### ಕವಿ ಗೋಷ್ಠಿ

ದಿನಾಂಕ 18-10-2015 ರಂದು ಶ್ರೀ ರಾಮಚಂದ್ರರಾವ್ ಪಟವಾರಿ, ವೀಸೀ., ಶ್ರೀಮತಿ ಪ್ರಭುಶಂಕರ, ಶ್ರೀ ವೆಂಕಟರಂಗಪ್ಪ, ಶ್ರೀ ಚಂದ್ರಶೇಖರ ಶರ್ಮಾ, ಶ್ರೀ ಎಸ್. ಶ್ರೀಕಂಠಯ್ಯ ಹಾಗೂ ಶ್ರಿ ಜಿ.ಪಿ. ರಾಜರತ್ನಂ ದತ್ತಿಗಳಡಿಯಲ್ಲಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸದಸ್ಯರು ತಮ್ಮ ಸ್ವರಚಿತ ಕವನಗಳ ವಾಚನ ಮಾಡುವ ಕವಿ ಗೋಷ್ಠಿಯನ್ನು ಏರ್ಪಡಿಸಲಾಗಿತ್ತು. ಈ ಕವಿ ಗೋಷ್ಠಿಯಲ್ಲಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ.ನಾರಾಯಣ ಅವರನ್ನೂ ಒಳಗೊಂಡಂತೆ ಹತ್ತು ಸದಸ್ಯರು 28 ಕವನಗಳನ್ನು ಓದಿದರು. ಮಂಡಿಸಿದ ಕವನಗಳಲ್ಲಿ ಸಾಮಾಜಿಕ ಕಳಕಳಿ, ಮಾಹಿತಿ, ವಿಡಂಬನ, ತಿಳಿ ಹಾಸ್ಯ, ವಿಶ್ಲೇಷಣೆ ಇವುಗಳು ಮನಮುಟ್ಟುವಂತೆ ಪರಿಣಾಮಕಾರಿಯಾಗಿ ಮೂಡಿಬಂದವು. ಈ ಕವಿ ಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿದ್ದ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಪ್ರೊ.ಅಬ್ದುಲ್ ಬಶೀರ್ ಅವರು ಕಾರ್ಯಕ್ರಮವನ್ನು ಚೊಕ್ಕವಾಗಿ ನಡೆಸಿಕೊಟ್ಟು ಪ್ರತಿಯೊಂದು ಕವನದಲ್ಲಿನ ವಿಶೇಷತೆಯನ್ನು ಗುರುತು ಮಾಡಿಕೊಂಡು ವಿವರಿಸಿ ತಿಳಿಸಿದರು.



## ಸಂಪಾದಕೀಯ

ಡಾ. ಎಂ ಎಂ ಕಲಬುರ್ಗಿ ಅವರ ಹತ್ಯೆಯ ನಂತರ ಹಂತಕರನ್ನು ಪತ್ತೆ ಮಾಡುವಲ್ಲಿ ವಿಳಂಬವಾಗುತ್ತಿದೆ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿ ಈ ಬಗ್ಗೆ ಹೆಚ್ಚಿನ ಆಸಕ್ತಿ ತೋರಿಸುತ್ತಿಲ್ಲ ಎಂಬ ಕಾರಣವನ್ನು ನೀಡಿ ಈವರೆಗೆ ದೇಶಾದ್ಯಂತ 30ಕ್ಕೂ ಹೆಚ್ಚು ಹಿರಿಯ ಹಾಗೂ ಗೌರವಾನ್ವಿತ ಸಾಹಿತಿಗಳು ತಮಗೆ ನೀಡಲಾಗಿದ್ದ ಪ್ರಶಸ್ತಿ ಬಹುಮಾನಗಳನ್ನು ಹಿಂತಿರುಗಿಸುತ್ತಿದ್ದಾರೆ. ಈ ರೀತಿಯ ವ್ಯಾಪಕ ಚಳುವಳಿಯ ಪರಿಣಾಮವಾಗಿ ಈ ಬಗ್ಗೆ ವಿವಾದ ಪ್ರಾರಂಭಗೊಂಡು ಪ್ರಶಸ್ತಿ ಹಿಂದಿರುಗಿಸುವ ಪರ ವಿರೋಧ ಹೇಳಿಕೆಗಳು ಎಲ್ಲಾ ಕಡೆಯಿಂದ ಕೇಳಿ ಬರುತ್ತಿವೆ. ಈ ವಿಷಯವೇ ಪ್ರಧಾನವಾಗಿ ಮೂಲ ವಿಷಯವಾದ ಹಂತಕರ ಪತ್ತೆ ಹಾಗೂ ಹತ್ಯೆಯ ಕಾರಣವನ್ನು ತಿಳಿದುಕೊಳ್ಳುವ ಬಗ್ಗೆ ಆಸಕ್ತಿ ಕಡಿಮೆಯಾಗುವ ಸಾಧ್ಯತೆಗಳು ಕಂಡು ಬರುತ್ತಿವೆ. ಈ ಚಳುವಳಿಯು ಸಕಾರಾತ್ಮಕವಾಗಿ ರೂಪುಗೊಂಡು ವ್ಯಕ್ತಿ ಸ್ವಾತಂತ್ರ್ಯವೇ ಮುಖ್ಯವಾಗಿರುವ ನಮ್ಮ ದೇಶದಲ್ಲಿ ಮತ್ತೊಮ್ಮೆ ಈ ರೀತಿ ಆಗದಿರುವಂತೆ ನೋಡಿಕೊಳ್ಳುವುದು ಇಡೀ ಸಮಾಜದ ಜವಾಬ್ದಾರಿಯಾಗಿರುತ್ತದೆ ಎಂಬುದನ್ನು ಎಲ್ಲರೂ ನೆನಪಿಡಬೇಕು.

ಪತ್ತೆದಾರಿ ಕೆಲಸ ಪೋಲೀಸ್ ಇಲಾಖೆಯದು. ಅವರು ದಕ್ಷತೆಯಿಂದ ಕೆಲಸ ಮಾಡುತ್ತಿದ್ದರೂ ಹಂತಕರನ್ನು ಈವರೆಗೆ ಪತ್ತೆ ಮಾಡಲು ಸಾಧ್ಯವಾಗದಕ್ಕೆ ಹಂತಕರ ಚಾಕಚಕ್ಯತೆಯೇ ಕಾರಣವಿರಬಹುದು. ಅಲ್ಲದೆ ಈ ಹಂತದಲ್ಲಿಪೋಲಿಸರು ಪತ್ತೆದಾರಿಕೆ ಪ್ರಗತಿಯನ್ನು ಪ್ರಕಟಿಸಲು ಸಾಧ್ಯವಿಲ್ಲ ಎಂಬುದು ಎಲ್ಲರಿಗೂ ತಿಳಿದಿರುವ ವಿಷಯವೇ. ಹೀಗಾಗಿ ಹಂತಕರ ಪತ್ತೆಗಾಗಿ ಪೋಲೀಸ್ ಇಲಾಖೆಯಮೇಲೆ ಈ ರೀತಿಯಲ್ಲಿ ಒತ್ತಡ ಹಾಕಬೇಕೆ?

ಸಾಹಿತ್ಯ ಕ್ಷೇತ್ರದ ಸಮಸ್ಯೆಗಳನ್ನೂ ಒಳಗೊಂಡು ನಾವು ಹಲವಾರು ಜ್ವಲಂತ ಸಮಸ್ಯೆಗಳನ್ನು ಎದುರಿಸುತ್ತಿದ್ದೇವೆ. ಆಗಬೇಕಾದ ಕೆಲಸಗಳು ಸಾಕಷ್ಟಿವೆ. ನಮ್ಮ ಹತಾಷೆಯನ್ನು ಸಕಾರಾತ್ಮಕವಾಗಿ ಪ್ರಕಟಪಡಿಸಬಹುದಲ್ಲವೇ?

ಅಂಚೆ ಇಲಾಖೆಯವರು ಹೊಂಗನಸು ಪತ್ರಿಕೆಗೆ ರಿಯಾಯಿತಿ ಪರವಾನಿಗೆ ನೀಡಿರುತ್ತಾರೆ. ಇನ್ನು ಮುಂದೆ ಹೊಂಗನಸು ಪತ್ರಿಕೆಯನ್ನು ಪ್ರತಿ ತಿಂಗಳು 30ನೇ ದಿನಾಂಕದಂದು ಅಂಚೆಗೆ ಹಾಕಲಾಗುತ್ತದೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ನಡೆಸುವ ಕಾರ್ಯಕ್ರಮಗಳ ವಿವರಗಳು ತಿಂಗಳ ಮೊದಲ ವಾರದಲ್ಲಿಯೇ ತಲುಪಿಬಿಡುತ್ತದೆ.

ಹೊಂಗನಸು ಪತ್ರಿಕೆಯಲ್ಲಿ ಹೆಚ್ಚಿನ ಪುಟಗಳನ್ನ ಸೇರಿಸುವುದಲ್ಲದೆ ವರ್ಣರಂಜಿತವಾಗಿ ಪ್ರಕಟಪಡಿಸುವ ಬಗ್ಗೆ ಚಿಂತನೆಗಳು ನಡೆಯುತ್ತಿವೆ. ನಿಮ್ಮ ಸಲಹೆ ಸೂಚನೆಗಳಿಗೆ ಸ್ವಾಗತ

ಚಂದಾಹಣವನ್ನು ಪಾವತಿಸಿಲ್ಲದವರು ಕೂಡಲೇ ಪಾವತಿಸಬೇಕೆಂದು ಕೋರುತ್ತೇವೆ.

**ಬಿಆರ್ ರವೀಂದ್ರನಾಥ್**
ಸಂಪಾದಕರು

## ವಿಶೇಷ ಸರ್ವಸದಸ್ಯರ ಸಭೆ

ದಿನಾಂಕ 4-10-2015 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಿಶೇಷ ಸರ್ವಸದಸ್ಯರ ಸಭೆಯಲ್ಲಿ ಕೆಲವು ಉಪನಿಯಮಗಳ ತಿದ್ದುಪಡಿಗಳನ್ನು ಚರ್ಚೆ ಮಾಡಿ ಅನುಮೋದನೆಗೊಂಡಿತು. ಪ್ರಮುಖ ತಿದ್ದುಪಡಿ ಅಂಶಗಳು ಇಂತಿವೆ:

1. ಸಾಮಾನ್ಯ ಸದಸ್ಯತ್ವ ರದ್ದುಗೊಂಡಿರುತ್ತದೆ
2. ಆಜೀವ ಸದಸ್ಯತ್ವ ಶುಲ್ಕದ ಮೊತ್ತ ರೂ. 2000/-
3. ಆಜೀವ ಸದಸ್ಯತ್ವ ಪಡೆಯುವುದನ್ನು ಸುಲಭಗೊಳಿಸಲಾಗಿದೆ.
4. ಕಾರ್ಯಕಾರಿ ಸಮಿತಿಗೆ ಚುನಾಯಿತರಾಗಲು ಕನಿಷ್ಠ ಎರಡು ವರ್ಷಗಳ ಕಾಲ ಆಜೀವ ಸದಸ್ಯರಾಗಿರಬೇಕು

ಈ ತಿದ್ದುಪಡಿಗಳನ್ನು ಶೀಘ್ರದಲ್ಲಿಯೇ ಕಾರ್ಯರೂಪಕ್ಕೆ ತರಲಾಗುವುದು.

---

## ಅಕ್ಕರಗೊಟ್ಟಿ – ನವೆಂಬರ್

**13-11-2015 ಶುಕ್ರವಾರ, ಸಂಜೆ 6-00 ಗಂಟೆ**

'ಕುಮಾರವ್ಯಾಸ ಭಾರತ'ದ ಎರಡು ಪದ್ಯಗಳ ಅರ್ಥಜಿಜ್ಞಾಸೆ

1.'ಬಲ್ಲರಾರದನಶ್ವಮೇಧದ
ಮಲ್ಲರನು ಕೃತರಾಜಸೂಯರು
ಬಲ್ಲರೇ ಕಡೆಬೀಡ ಕೋಟೆಯ ಗುಡಿಯ ಬೊಡ್ಡಿಯರು
ಎಲ್ಲಿಯಮರಾವತಿ ನರಾಧಮ
ರೆಲ್ಲಿ ನಾವೀಶ್ವರನ ಕರುಣದ
ಛುಲ್ಲವಣೆಯಲಿ ಭಾಗ್ಯವೆಂದನು ನಗುತ ಕಲಿಪಾರ್ಥ ॥

(ಕುವ್ಯಾಭಾ ಅರಣ್ಯಪರ್ವ: ಸಂಧಿ 7, ಪದ್ಯ 16)

2. ಭೇದವಿಲ್ಲೆಲೆ ಕರ್ಣ ನಿಮ್ಮೊಳು
ಯಾದವರು ಕೌರವರೊಳಗೆ ಸಂ
ವಾದಿಸುವಡನ್ವಯದ ಮೊದಲೆರಡಿಲ್ಲ ನಿನ್ನಾಣೆ ।
ಇಂದು ಮುರಿದುದು ಸಂಧಿ ನಿನ್ನಯ
ಕಂದ ಕರ್ಣನ ಬೇಡಿಕೊಳು ನೀ
ನೆಂದು ನೇಮಿಸಿ ಮರಳಿದನು ಮುರವೈರಿ ಹರುಷದಲಿ ॥

(ಕುವ್ಯಾಭಾ, ಉದ್ಯೋಗಪರ್ವ, ಸಂಧಿ 10. ಪದ್ಯ 3)

ಚರ್ಚೆಗೆ ಚಾಲನೆ: ಶ್ರೀ ಚಂದ್ರಶೇಖರ, (ಪ್ರಿನ್ಸಿಪಾಲರು, ವಿಜಯ ಸಂಜೆ ಪದವಿಪೂರ್ವ ಕಾಲೇಜು, ಜಯನಗರ, ಬೆಂಗಳೂರು – 560 011)

# ನವೆಂಬರ್ 2015ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು



**13-112015 ಶುಕ್ರವಾರ ಸಂಜೆ 6.ಕ್ಕೆ ಅಕ್ಕರಗೊಟ್ಟಿ**

ಕುಮಾರವ್ಯಾಸ ಭಾರತದ ಎರಡು ಪದ್ಯಗಳ ಅರ್ಥಜಿಜ್ಞಾಸೆ

(ಪದ್ಯಗಳನ್ನು ಎರಡನೇ ಪುಟದಲ್ಲಿ ಕೊಡಲಾಗಿದೆ)



**17-11-2015 ಮಂಗಳವಾರ ಸಂಜೆ 6.ಕ್ಕೆ**

**ಕನ್ನಡ ಸಂಸ್ಕೃತಿ ದರ್ಶನ**

ವಿಡಿಯೋ ಚಿತ್ರಗಳ ಪ್ರದರ್ಶನ

ವಿಷಯ: ಶಾಸನಗಳು



**23-11-2015 ಸೋಮವಾರ ಸಂಜೆ 6.ಕ್ಕೆ**

ವಚನ ವಿಹಾರ

ಸಂಗೀತಾತ್ಮಕ ವಿಡಿಯೋ ಚಿತ್ರಗಳ ಪ್ರದರ್ಶನ



**28-11-2015 ಶನಿವಾರ ಸಂಜೆ 6.ಕ್ಕೆ**

**ಸರ್.ಸಿ.ವಿ ರಾಮನ್ ಸ್ಮಾರಕ ಉಪನ್ಯಾಸ**

ಉಪನ್ಯಾಸಕರು : ಡಾ. ಹಾಲ್ದೊಡ್ಡೇರಿ ಸುಧೀಂದ್ರ

ವಿಷಯ : ರಾಮನ್ ಬಿತ್ತಿದ ಬೀಜಗಳು-

ನಿರಂತರ ಫಲ ನೀಡುವ ಹೆಮ್ಮರಗಳಾದರ್ತೆ



ಪ್ರೊ. ತೀ.ನಂ.ಶ್ರೀ ಸ್ಮಾರಕ ವಿಶೇಷೋಪನ್ಯಾಸ

ಉಪನ್ಯಾಸಕರು : ನಾಡೋಜ ಬರಗೂರು ರಾಮಚಂದ್ರಪ್ಪ

ದಿನಾಂಕ ತಿಳಿಸಲಾಗುವುದು.

## ಕವಿ ಗೋಷ್ಠಿಯ ಕವನಗಳು

ಕವಿ ಗೋಷ್ಠಿಯಲ್ಲಿ ವಾಚನ ಮಾಡಿದ ಕವನಗಳನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಲ್ಲಾ ಸದಸ್ಯರಿಗೂ ತಲುಪಿಸುವ ಉದ್ದೇಶದಿಂದ ಹೊಂಗನಸು ಪತ್ರಿಕೆಯಲ್ಲಿ ಸ್ಥಳಾವಕಾಶ ಆದ್ಯತೆ ಮೇರೆಗೆ ಪ್ರತಿ ತಿಂಗಳೂ ಆಯ್ದ ಕವನಗಳನ್ನು ಪ್ರಕಟಿಸಲಾಗುವುದು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದ ಶ್ರೀ ಗುರುಪ್ರಸಾದ್ ಅವರು ರಚಿಸಿದ ಹಸ್ತಪ್ರತಿಗಳ ಆತ್ಮಕಥೆ ಕವನವನ್ನು ಈ ಕೆಳಗೆ ನೀಡಲಾಗಿದೆ:

# ಹಸ್ತಪ್ರತಿಗಳ ಆತ್ಮಕಥೆ

ಹಸ್ತಪ್ರತಿಗಳು, ಹಸ್ತಪ್ರತಿಗಳು,
ಯಾವುದು ಯಾವುದೆಲ್ಲವು ಹಸ್ತಪ್ರತಿಗಳು.
ಭಾಷೆಯಲ್ಲಿ ಹಿಡಿತ ಸಾಧಿಸಲು,
ಮೌಖಿಕ ಪರಂಪರೆಯನ್ನು ಬರವಣಿಗೆ ರೂಪದಲು ತರಲು
ಮಾನವನಿಂದ ಅವತರಿಸಿದ ನಾವು
ತಾಳೆಗರಿಗಳು, ಕೋರಿ ಕಾಗದಗಳು, ಭೂರ್ಜಪತ್ರಗಳು,
ಅರಿವೆಗಳು,
ನಾವು ಪ್ರಾಚೀನ ಕಾಲದ ಗ್ರಂಥಗಳು.
ಕಾಲಗರ್ಭದಲಿ ಮರೆಯಾಗುವ, ನಾಶವಾಗುವ
ಅಲ್ಪಾಯುಷಿಗಳು.
ಲ್ಯಾಟೀನಿನ Manu-ಕೈ, Scriptum-ಬರವಣಿಗೆ
ಇವುಗಳ ಸಂಯುಕ್ತ ರೂಪ Manuscript -
ಹಸ್ತಪ್ರತಿ,ಕೈಬರವಣಿಗೆ.

ನಮ್ಮ ವಾಸಸ್ಥಾನಗಳು
ವೇದ ಪಾಠಶಾಲೆಗಳು,
ಮಠಮಾನ್ಯಗಳು,
ಅರಮನೆ, ಗುರು ಮನೆಗಳು

ವಿಶ್ವವಿದ್ಯಾನಿಲಯಗಳು, ಸಂಗ್ರಹಾಲಯಗಳು,
ಖಾಸಗಿ ಒಡೆತನದ ಸ್ವತ್ತುಗಳು,
ಸ್ಮಾರಕಗಳಂತೆ ಶಾಶ್ವತವಾಗಲಾರೆವು.

ನಮ್ಮ ಸೃಷ್ಟಿಕರ್ತರು ಯಾರು?
ಓಲೆಕಾರರ ಕುಟುಂಬವರ್ಗ, ಲಿಪಿಕಾರರ/ಪ್ರತಿಕಾರರ
ಸಮೂಹ,
ವೃತ್ತಿ ಲಿಪಿಕಾರರು, ನಿಯೋಜಿತ ಲಿಪಿಕಾರರು,
ಹವ್ಯಾಸಿ ಲಿಪಿಕಾರರು, ವಿದ್ಯಾರ್ಥಿಗಳು
ಹೀಗೆ ಕೃತಿ ಪ್ರಸರಣ, ಸಂರಕ್ಷಣ ಕಾರ್ಯ ನಿರತರು.

ರಕ್ಷಾಕವಚ ಅಟ್ಟೆಗಳ ಮಧ್ಯೆ
ಬಂಧಿಯಾಗಿ ಕೂತ ನಮ್ಮಗಳ ಮಧ್ಯೆ
ನುಸಿ, ಬೆಳ್ಳಿಮೀನು, ಕ್ರಿಮಿ,ಕೀಟಗಳೊಡನೆ
ಹೋರಾಡಿಯೂ ಸುಸ್ಥಿತಿಯ ಕಾಪಾಡಿಕೊಂಡು
ಕೆಲವೊಮ್ಮೆ ತ್ರುಟಿತವಾಗಿ ಬದುಕುವೆವು
ಅಸ್ತವ್ಯಸ್ತವಾಗಿ, ಸಡಿಲವಾಗಿ,
ಕಟ್ಟಿದ ಫಲವಾಗಿ ನಾವು ತುಂಡಾಗುವೆವು.
ಬೆಳಕು, ಕ್ರೀಮಿಗಳು,ನುಸುಳದಂತೆ
ಕೆಂಪು,ನೀಲಿ,ಹಳದಿ ಬಟ್ಟೆಗಳಲ್ಲಿ ನಾವು
ಅಲಂಕಾರಿಕವಾಗಿ ಬಂಧಿಗಳು.

ಭಾಷೆಗಳು, ಲಿಪಿಗಳು ಒಂದೇ ಎರಡೇ,
ಪ್ರಾಕೃತ,ಸಂಸ್ಕೃತ, ಕನ್ನಡ,ತೆಲುಗು, ಮಣಿಪ್ರವಾಳ
ಲಿಪಿ ವೈವಿಧ್ಯ- ನಂದಿನಾಗರಿ,ದೇವನಾಗರಿ,
ಕನ್ನಡ, ತೆಲಗು,ತಮಿಳು, ಗ್ರಂಥ, ತಿಗಳಾರಿ

ವಿಷಯಗಳೋ - ವೇದ, ವೈದ್ಯಕೀಯ, ಆಯುರ್ವೇದ,
ಶಾಸ್ತ್ರ,ಜ್ಯೋತಿಷ, ವೇದಾಂಗ, ಆಗಮಸಾರ, ಸಿದ್ಧಾಂತ,
ವ್ಯಾಕರಣ, ಅಮರಕೋಶ, ಮಾಘಕಾವ್ಯ, ನಳಚರಿತ್ರೆ,
ನೈಷಧಚರಿತಂ,
ಸಂಗಬಸವಣ್ಣನ ಜೋಜೋ ಪದಗಳು, ಯಕ್ಷಗಾನ,
ಚವ್ವೀಸ ತೀರ್ಥಂಕರರ ಸೋಬಾನೆಪದಗಳು.

ಕಷ್ಟೇನ ಲಿಖಿತಂ ಮಯಾ
ಯತ್ನೇನ ಪರಿಪಾಲಯೇತ್,
ತೈಲಾದ್ರಕ್ಷೇಜ್ಜಲಾದ್ರಕ್ಷೇತ್ ರಕ್ಷೇಚ್ಛಿಲಬಂಧಾನತ್
ಎಂಬ ಲಿಪಿಕಾರನ ಮನವಿಗೊಗೊಟ್ಟು,
ಸಂಗ್ರಹಿಸಿ ತನ್ನಿ ನಮ್ಮ ನಾಡಲ್ಲಿರುವ
ಹಸ್ತಪತ್ರಿಗಳನ್ನು ಬಿ ಎಂ.ಶ್ರೀ ಪ್ರತಿಷ್ಠಾನಕ್ಕೆ,
ನಾವು ಸಂರಕ್ಷಿಸುವ, ದಾಖಲೀಕರಿಸುವ, ಸಂಶೋಧಕರಿಗೂ
ಹಾಗೂ ಮುಂದಿನ ಪೀಳಿಗೆಗೆ ನೀಡುವ.

# ಅಕ್ಕರ ಗೊಟ್ಟಿ' (ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ)

**ಅಕ್ಕರಗೊಟ್ಟಿ ಕಾರ್ಯಕ್ರಮ-3 (09-10-2015ಶುಕ್ರವಾರ)**

-ಡಾ.ಆರ್. ಲಕ್ಷ್ಮೀನಾರಾಯಣ

**ಸಂಜೆ 5:30 ರಿಂದ 7:30 ಶಾ. ಬಾಲೂರಾವ್ ಮಾತಿನ ಮಂಟಪ**

**ವಿಷಯ: ಪಂಪಭಾರತದ ಒಂದುಪದ್ಯದ ಪಾಠ ಮತ್ತು ಅರ್ಥಜಿಜ್ಞಾಸೆ**

'ನುಡಿವುದಂ ಪತಿಭಕ್ತಿಯ ಪೆಂಪಿಂ ನೀಂ ನುಡಿದಯ್ ಪೆಱತಂದದಿಂ
ನುಡಿದೆಯಲ್ತೆ ಮದಾಯಮಮೋಘಂ ಸೂಟ್ಪಡೆಯಲ್ಕೆನಗಕ್ಕುಮಿ
ನ್ನೆಡೆಯೊಳೆಂದೆಮದೆಂದುದದೇಂ ತಪ್ಪಾದುದೆ ನಮ್ಮೊವಜರ್ ಜಸಂ
ಬಡೆದ ಭಾರ್ಗವರಪ್ಪುದಱಿಂದಂ ನಂಟರುಮಂಗಮಹೀಪತಿ (12-56)

ಪಂಪಭಾರತದ ಈ ಪದ್ಯದ ಸಂದರ್ಭ ಹೀಗಿದೆ.

ಕೌರವಸೈನ್ಯದ ಸೇನಾಧಿಪತ್ಯದ ಜವಾಬ್ದಾರಿಹೊತ್ತಿರುವ ಪ್ರಕೃತ ಸಂದರ್ಭದಲ್ಲಿ ಕರ್ಣನು ತಾನು ಹಿಂದೆ ಭೀಷ್ಮರಿಗೆ ಸೇನಾಧಿಪತಿ ಪಟ್ಟ ಕಟ್ಟಿದ ಸಂದರ್ಭದಲ್ಲಿ (ಪಂಪಭಾರತದ ಹತ್ತನೇ ಆಶ್ವಾಸದ 16ನೇ ಪದ್ಯದಿಂದ ಪ್ರಾರಂಭಿಸಿ 25ನೇ ಪದ್ಯದವರೆಗೆ) ಅವರನ್ನು ತುಚ್ಛೀಕರಿಸಿ ಮಾತನಾಡಿದ್ದಕ್ಕೆ ಕ್ಷಮೆಬೇಡಿ ಅವರ ಆಶೀರ್ವಾದ ಪಡೆಯಲು ಬಂದಿರುವುದಾಗಿ ಹೇಳಿದಾಗ ಅವನನ್ನು ಸಮಾಧಾನಪಡಿಸುತ್ತ ಭೀಷ್ಮರು ಹೇಳಿದ ಮಾತಾಗಿ ಮೇಲಿನ ಪದ್ಯ ಬಂದಿದೆ. ಈ ಪದ್ಯವನ್ನು ಅರ್ಥೈಸುವಲ್ಲಿ ಸಮಸ್ಯೆ ಇದೆ ಎಂದು ಹೇಳುತ್ತ ಪ್ರೊ.ಡಿ .ಎಲ್.ಎನ್ ಅವರು ತಮ್ಮ ಪಂಪಭಾರತದೀಪಿಕೆಯಲ್ಲಿ "ಹೇಳುವುದನ್ನು ನೀನು ಸ್ವಾಮಿಭಕ್ತಿಯ ಹಿರಿಮೆಯಿಂದ ಹೇಳಿದೆ. ಬೇರೆ ರೀತಿಯಿಂದ ಮಾತಾಡಲಿಲ್ಲವಲ್ಲವೆ?ನನ್ನ ಸಾಮರ್ಥ್ಯವು ವ್ಯರ್ಥವಲ್ಲದ್ದು.(ಹೀಗೆಂದು ಭೀಷ್ಮ ತನ್ನನ್ನು ತಾನೆ ಹೊಗಳಿಕೊಳ್ಳುವನೆ? ಆದ್ದರಿಂದ ನನ್ನ ಲಾಭವು , ನನ್ನ ದರ್ಶನ ಲಾಭವು ವ್ಯರ್ಥವಲ್ಲದ್ದು ಎಂದಾಗಬಹುದು. 'ಆಯ' ಎಂಬ ಶಬ್ದಕ್ಕೆ ಸಾಮರ್ಥ್ಯ ಎಂಬ ಅರ್ಥ ಕಾಣುವುದಿಲ್ಲ). ಸರದಿಯನ್ನು ಪಡೆಯುವುದಕ್ಕೆ ನನಗೆ ಆಗುತ್ತದೆ. ಇನ್ನು ನಡುವೆ, ಎಂದು ಹೇಳಿದೆನು. ಹೇಳಿದ ಆ ಮಾತು ಅದೇನು ತಪ್ಪಾದುದೆ? ನಮ್ಮಿಬ್ಬರ ಗುರುಗಳು ಕೀರ್ತಿವಂತರಾದ ಪರಶುರಾಮರು ಆದ ಕಾರಣದಿಂದ ಕರ್ಣನೇ ನಾವು ನಂಟರಾಗಿದ್ದೇವೆ."ಎಂದು ಇದರ ತಾತ್ಪರ್ಯ ಎಂದಿದ್ದಾರೆ.

ಇಲ್ಲಿ ಸಮಸ್ಯೆ ಇರುವುದೆಲ್ಲಾ ಎರಡನೇ ಸಾಲಿನಲ್ಲಿ ಬರುವ 'ಮದಾಯಮಮೋಘಂ ಸೂಟ್ಪಡೆಯಲ್ಕೆನಗಕ್ಕು ಮಿನ್ನೆಡೆಯೊಳೆಂದೆಮದೆಂದು' ಭಾಗದಲ್ಲಿ. ಡಾ. ಎಲ್. ಬಸವರಾಜು ಅವರು ಈ ಪದ್ಯವನ್ನು ಅರ್ಥೈಸುತ್ತ ' ಭೀಷ್ಮರು ಇಚ್ಛಾಮರಣಿಗಳು -ಬೇಕಾದಷ್ಟು ಆಯುಷ್ಯವಿದೆ. ತಡೆದು ಯುದ್ಧಮಾಡಬಹುದಾಗಿತ್ತು. ಕರ್ಣನಿಗಾದರೋ ಅಂಥ ಆಯುಷ್ಯವಿಲ್ಲ. ಆದ್ದರಿಂದಲೂ ಕರ್ಣ ಭೀಷ್ಮರಿಗಿಂತ ಮೊದಲು ವೀರ ಪಟ್ಟವನ್ನು ಕಟ್ಟಿಸಿಕೊಳ್ಳಲು ಅವಸರಪಟ್ಟಿದ್ದರಲ್ಲಿ ತಪ್ಪೇನೂ ಇಲ್ಲ -ಎಂಬಂಥ ಮಾತುಗಳನ್ನು ಭೀಷ್ಮಾಚಾರ್ಯರು ಈ ಪದ್ಯ ಪರಿಮಿತಿಯಲ್ಲಿ ಹೇಳುತ್ತಾರೆ- ಕ್ಷಮೆಕೇಳಲು ಬಂದ ಕರ್ಣನಿಗೆ. ಹಿಂದೆ 10-23ರಲ್ಲಿ 'ಸೂಟ್ಪಡೆಯಲಪ್ಪುದು ಕಾಣ ಮಹಾಜಿರಂಗದೊಳ್' ಎಂದು ತಾವೇ ಅವಸರಪಟ್ಟು ಕರ್ಣನಿಗೆ ಹೇಳಿದ್ದರು.ಅದನ್ನು ಇಲ್ಲಿ ಭೀಷ್ಮರು ಮನಗಂಡು ಮಿದುವಾದಂತೆ ಪಂಪ ಚಿತ್ರಿಸಿದ್ದಾನೆ.' ಎಂದು ಹೇಳಿದ್ದಾರೆ.(ಪಂ. ಭಾ.ಪು.458ರ ಅಡಿಟಿಪ್ಪಣಿ) ವಾಸ್ತವವಾಗಿ ಈ ಇಬ್ಬರ ಅರ್ಥೈಸುವಿಕೆಯೂ ಸರಿಯಾಗಿಲ್ಲ.



ಕರ್ಣನು ತಾನು ಹಿಂದೆ ಆಡಿದ ಮಾತುಗಳು ತಪ್ಪು ಎಂದು ಹೇಳಿದಾಗ ಭೀಷ್ಮರು ಅವನನ್ನು ಸಮಾಧಾನಪಡಿಸುತ್ತ ನೀನು ಆಡಿದ ಯಾವ ಮಾತುಗಳೂ ತಪ್ಪಲ್ಲ. ಅವೆಲ್ಲ ಸ್ವಾಮಿಯಾದ ದುರ್ಯೋಧನನ ಮೇಲಿನ ಭಕ್ತಿಯಿಂದ ಹೇಳಿದ್ದು. ನೀನು ಹೇಳಿದ್ದು ತಾನೆ ಏನು ಎನ್ನುತ್ತ ಅವನು ಹೇಳಿದ ಮಾತುಗಳನ್ನು ಭೀಷ್ಮರು ಈಗ ತಮ್ಮ ಬಾಯಿಂದ ಹೇಳುತ್ತಿದ್ದಾರೆ . ಹಾಗಾಗಿ ಆವರಣ ಚಿಹ್ನೆಯಲ್ಲಿ ಇರುವುದೆಲ್ಲಾ ಕರ್ಣನು ಹೇಳಿದ ಮಾತುಗಳು(=ನನ್ನ ಪರಾಕ್ರಮ ವ್ಯರ್ಥವಲ್ಲದ್ದು; ಅಂದರೆ ಸಾರ್ಥಕವಾದ್ದು. ಈಗ ಸೇನಾಧಿಪತಿಯ ಪಟ್ಟ ಪಡೆದುಕೊಳ್ಳುವುದು ಈಸಂದರ್ಭದಲ್ಲಿ ನನಗೆ ಆಗಬೇಕು). ಆದ್ದರಿಂದ "ಯೊಳೆಂದೆಮದೆಂ" ಎಂಬ ಅಕ್ಷರ ಸಮೂಹ ಮಧ್ಯಮಪುರುಷ ವಾಚಿಯಾಗಿ "ಯೊಳೆಂದಯುದೆಂ" (ಯೊಳೆಂದಯ್+ಅದೆಂ) ಎಂದಾಗಬೇಕು. ಕಾರಣ ಹಿಂದೆ ತನ್ನ ಪರಾಕ್ರಮದ ಬಗ್ಗೆ ಹೇಳುತ್ತ ಸೇನಾಧಿಪತಿ ಪಟ್ಟದ ಸರದಿ(ಸೂಟ್) ತನಗಾಗಬೇಕೆಂದು ("ಪಗೆವರ ನಿಟ್ಟೆಲ್ವಂ ಮುರಿವೊಡೆನಗೆ ಪಟ್ಟಂಗಟ್ಟಾ") ತನ್ನ ಹಕ್ಕನ್ನು ಪ್ರತಿಪಾದಿಸಿದ್ದವನು ಕರ್ಣನೇ. ಆದ್ದರಿಂದ ಭೀಷ್ಮರು ನೀನು ಹೀಗೆ ಹೇಳಿದ್ದೆ ಎಂಬ ಅರ್ಥದಲ್ಲಿ "ಮದಾಯಮಮೋಘಂ ಸೂಟ್ಪಡೆಯಲ್ಕೆನಗಕ್ಕುಮಿನ್ನೆಡೆಯಳ್"+ ಎಂದಯ್+ಅದು+ ಎಂದುದು+ಅದೇಂ ತಪ್ಪಾದುದೆ ಎಂದು ಪದವಿಭಾಗಮಾಡಿದಾಗ ಮಾತ್ರ ಪಂಪನ ಪದ್ಯದ ಆಶಯ ಸರಿಯಾಗಿ ಹೊರಪಡುತ್ತದೆ.

ಈ ಚರ್ಚೆಯು ತುಂಬ ಉಪಯುಕ್ತವಾಗಿ ಚಿಂತನೆಗಳ ಕಡೆತದಿಂದ ಹೊಸ ಆಲೋಚನೆಗಳಿಗೆ ಎಡೆಗೊಟ್ಟಿತು. ಚರ್ಚೆಯಲ್ಲಿ ಡಾ. ನಳಿನಿ ವೆಂಕಟೇಶ್, ಡಾ.ಜಯಮ್ಮ ಕರಿಯಣ್ಣ, ಡಾ.ಪಿ.ವಿ. ನಾರಾಯಣ, ಪ್ರೊ.ಅಬ್ದುಲ್ ಬಶೀರ್, ಶ್ರೀ ಗುರುಪ್ರಸಾದ್, ಶ್ರೀ ವೆಂಕಟರಮಣಯ್ಯ, ರವೀಂದ್ರನಾಥ್ ಮುಂತಾದವರು ಪಾಲ್ಗೊಂಡು ಕಾರ್ಯಕ್ರಮ ಯಶಸ್ವಿಯಾಗಲು ಸಹಕರಿಸಿದರು.

### ವಚನ ವಿಹಾರ

#### ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ

ಸೋಮವಾರ 29-10-2015 ರಂದು ಸಂಜೆ ಆರು ಗಂಟೆಗೆ ವಚನ ವಿಹಾರ - ವಚನಗಳ ಗಾಯನ ಮತ್ತು ವ್ಯಾಖ್ಯಾನಗಳನ್ನು ಒಳಗೊಂಡಿರುವ ವಿಡಿಯೋ ಚಿತ್ರಗಳ ಪ್ರದರ್ಶನ ನಡೆಯಿತು.ಸುಮಾರು ಒಂದು ಗಂಟೆಯ ಈ ಸಂಗೀತಮಯ ಕಾರ್ಯಕ್ರಮದಲ್ಲಿ ವಚನ ಚಳುವಳಿ, ಬಸವಣ್ಣ ಅವರ ಪಾತ್ರದ ಬಗ್ಗೆ ಬಹಳ ರಸವತ್ತಾಗಿ ವಿವರಿಸಲಾಗಿದ್ದು ಜೊತೆಗೆ ವಚನಗಳನ್ನು ಪ್ರಸಿದ್ಧ ಗಾಯಕರು ಇಂಪಾಗಿ ಹಾಡಿರುವ ಭಾಗಗಳೂ ಇದ್ದು ಅಧಿಕ ಸಂಖ್ಯೆಯಲ್ಲಿ ಹಾಜರಿದ್ದ ಸಭಿಕರಿಗೆ ಹೊಸ ಅನುಭವವನ್ನು ತಂದುಕೊಟ್ಟಿತು.

#### ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗಳು ಈಗ ಯೂ ಟ್ಯೂಬ್ ನಲ್ಲಿ ಲಭ್ಯ

ಸದಸ್ಯರು ಹಾಗೂ ವಿಶ್ವದಾದ್ಯಂತ ಇರುವ ಪ್ರತಿಷ್ಠಾನದ ಅಭಿಮಾನಿಗಳ ಅನುಕೂಲಕ್ಕಾಗಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗಳ ಧ್ವನಿ ಮುದ್ರಿತ ಉಪನ್ಯಾಸಗಳು ಹಾಗೂ ವಿಡಿಯೋಗಳನ್ನು ಜನಪ್ರಿಯ ಯೂ ಟ್ಯೂಬ್ ನಲ್ಲಿ ಅಳವಡಿಸಲಾಗಿದೆ. ಇವುಗಳನ್ನು ತಲುಪಲು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣ ತಿತಿತಿ.ಛಿಟಿಡು.ಡಿಣ ಗೆ ಭೇಟಿ ನೀಡಿ.

## ಸದಸ್ಯರಲ್ಲಿ ಮನವಿ

ಅಂಚೆ ಇಲಾಖೆಯವರು ಹೊಂಗನಸು ಪತ್ರಿಕೆಗೆ ರಿಯಾಯಿತಿ ಪರವಾನಿಗೆ ನೀಡಿರುತ್ತಾರೆ.ಇನ್ನು ಮುಂದೆ ಹೊಂಗನಸು ಪತ್ರಿಕೆಯನ್ನು ಪ್ರತಿ ತಿಂಗಳು 30ನೇ ದಿನಾಂಕದಂದು ಅಂಚೆಗೆ ಹಾಕಲಾಗುತ್ತದೆ.ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ನಡೆಸುವ ಕಾರ್ಯಕ್ರಮಗಳ ವಿವರಗಳು ತಿಂಗಳ ಮೊದಲ ವಾರದಲ್ಲಿಯೇ ತಲುಪಿಬಿಡುತ್ತದೆ.ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ನಡೆಸುವ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸಲು ತಿಂಗಳ ಪ್ರಾರಂಭದಲ್ಲಿಯೇ ಈ ದಿನಾಂಕಗಳನ್ನು ಗುರುತು ಮಾಡಿಕೊಂಡು ಎಲ್ಲಾ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಕೋರುತ್ತೇವೆ. ದತ್ತಿದಾನಿಗಳ ಆಶಯದಂತೆ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಧ್ಯೇಯಗಳಿಗೆ ಅನುಗುಣವಾದ ಕಾರ್ಯಕ್ರಮಗಳನ್ನು ನಡೆಸಲು ಬಹಳಷ್ಟು ಸಿದ್ದತೆಗಳು ಬೇಕಾಗುತ್ತವೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಪದಾಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗದವರು ಶ್ರಮವಹಿಸಿ ಕಾರ್ಯಕ್ರಮವನ್ನು ರೂಪಿಸಿ ಎಲ್ಲಾ ಸದಸ್ಯರಿಗೂ ಅನುಕೂಲಕರವಾಗಿರುವಂತೆ ಲಘು ಉಪಾಹಾರವನ್ನೂ ಒಳಗೊಂಡ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತಿದ್ದೇವೆ. ನೀವು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ಅತಿಥಿ ಉಪನ್ಯಾಸಕರು ಹಾಗೂ ಗಣ್ಯರು ಮಂಡಿಸುವ ವಿದ್ವತ್ ಭರಿತ ಅನುಭವೀ ವಿಚಾರಗಳನ್ನು ತಿಳಿದುಕೊಳ್ಳಿ ಹಾಗೂ ಈ ಕಾರ್ಯಕ್ರಮಗಳನ್ನು ಆಯೋಜಿಸಲು ಕಾರಣರಾದ ಎಲ್ಲರಿಗೂ ಪ್ರೋತ್ಸಾಹಿಸಿ ಎಂದು ಕೋರುತ್ತೇವೆ.

## ಶಾಶ್ವತ ನಿಧಿ

#### ಸಾಹಿತ್ಯಾಸಕ್ತರಲ್ಲಿ ಒಂದು ಬಿನ್ನಹ

ಪ್ರತಿಷ್ಠಾನದ ಮುಂದೆ ಹಸ್ತಪ್ರತಿಗಳ ರಕ್ಷಣೆ, ಡಿಜಿಟೀಕರಣ ಮತ್ತು ಅಧ್ಯಯನ, ಮಾಧ್ಯಮ ಕನ್ನಡ ಬರವಣಿಗೆಯ ಬಗೆಗಿನ ಸ್ನಾತಕೋತ್ತರ ಡಿಪ್ಲೊಮ ತರಗತಿಗಳನ್ನು ನಡೆಸುವುದು, ನಮ್ಮ ಹಿರಿಯ ಸಂಶೋಧಕರ ಬಗ್ಗೆ ಸಾಕ್ಷ್ಯಚಿತ್ರಗಳನ್ನು ತಯಾರಿಸುವ ಯೋಜನೆ, ಮೌಲಿಕ ಪುಸ್ತಕಗಳ ಪ್ರಕಟಣೆ, ಹಳಗನ್ನಡದ ವಿಶೇಷ ಅಧ್ಯಯನಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವುದು ಇಂತಹ ಹಲವಾರು ಯೋಜನೆಗಳು ಮುಂದಿವೆ. ಇವಕ್ಕೆಲ್ಲ ಹಣದ ಆವಶ್ಯಕತೆ ಇದೆ.

ಈ ದಿಸೆಯಲ್ಲಿ ಪ್ರತಿಷ್ಠಾನವು ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸುವ ಆಲೋಚನೆಯಲ್ಲಿದೆ.ಈ ನಿಧಿಯ ಮೇಲಿನ ಬಡ್ಡಿ ಹಣದಿಂದ ನಮ್ಮ ಮುಂದಿನ ಯೋಜನೆಗಳನ್ನು ಕಾರ್ಯಗತಗೊಳಿಸುವುದು ನಮ್ಮ ಉದ್ದೇಶವಾಗಿರುತ್ತದೆ.ನಮ್ಮ ಉದ್ದೇಶ ಸಾಕಾರಗೊಳ್ಳಲು ತಮ್ಮಂತಹ ಉದಾರಿಗಳ ನೆರವು ಅಗತ್ಯ

ತಮ್ಮಲ್ಲಿ ವಿಶೇಷವಾಗಿ ಮಾಡುವ ಮನವಿಯೆಂದರೆ, ತಾವು ಉದಾರವಾಗಿ ದಾನದ ರೂಪದಲ್ಲಿ ನಮ್ಮ ಸಂಸ್ಥೆಗೆ ಧನಸಹಾಯ ಮಾಡಬೇಕೆಂದು ತಮ್ಮನ್ನು ಕೋರುತ್ತೇವೆ. ತಮ್ಮಂತಹವರು ನಮ್ಮ ಚಟುವಟಿಕೆಗಳಿಗೆ ಬೆಂಬಲ ನೀಡಿದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರ ಮತ್ತಷ್ಟು ಶ್ರೀಮಂತವಾಗಲು ಸಾಧ್ಯವಾಗಬಹುದಾಗಿರುತ್ತದೆ.

ತಾವು ದತ್ತಿನಿಧಿಗಳನ್ನು ಸ್ಥಾಪಿಸುವ ಮೂಲಕ, ಶಾಶ್ವತ ನಿಧಿಗೆ ಉದಾರವಾಗಿ ಧನಸಹಾಯ ಮಾಡುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳನ್ನು ಖರೀದಿಸುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳ ಪ್ರಾಯೋಜಕತ್ವವನ್ನು ವಹಿಸಿಕೊಳ್ಳುವುದರ ಮೂಲಕ ಹಲವು ವಿಧಗಳಲ್ಲಿ ನಮ್ಮ ಜೊತೆ ಕೈ ಜೋಡಿಸಬಹುದಾಗಿರುತ್ತದೆ.

ಪ್ರತಿಷ್ಠಾನಕ್ಕೆ ನೀಡುವ ನಿಧಿಯ ಮೊಬಲಗಿನ ಮೇಲೆ ಭಾರತ ಸರ್ಕಾರದ ಆದಾಯ ತೆರಿಗೆ ಕಾನೂನಿನ '80 ಜ' ಅನ್ವಯ ತೆರಿಗೆ ವಿನಾಯಿತಿ ದೊರೆಯುತ್ತದೆ.

ತಾವು ತಮ್ಮ ಕಾಣಿಕೆಗಳನ್ನು ಚೆಕ್/ಡಿಡಿ ಮೂಲಕ ಪ್ರತಿಷ್ಠಾನದ ಹೆಸರಿನಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು.

ಶಾಶ್ವತ ನಿಧಿಗೆ 2015 ರ ಸೆಪ್ಟೆಂಬರ್ ಹಾಗೂ ಅಕ್ಟೋಬರ್ ತಿಂಗಳುಗಳಲ್ಲಿ ಕಾಣಿಕೆ ನೀಡಿರುವವರ ಪಟ್ಟಿ:

ಪ್ರೊ.ಎಲ್.ಎಸ್. ಶೇಷಗಿರಿರಾವ್, ಶ್ರೀ ಎ.ಎನ್. ಪ್ರಕಾಶ್, ಡಾ.ಟಿ.ಕೆ. ನಂಜುಂಡಪ್ಪ ಶ್ರೀಮತಿ ಲಲಿತಾ, ಡಾ. ಪಿ.ವಿ.ನಾರಾಯಣ, ಡಾ.ಕೆ ಶಿವಶಂಕರ್ ಹಾಗೂ ಶ್ರೀಮತಿ ಪದ್ಮಾ ಆರ್.ಶರ್ಮಾ. ಇಲ್ಲಿಯವರೆಗೆ ಸಂಗ್ರಹಿಸಲಾದ ಮೊತ್ತ ರೂ. 15.50 ಲಕ್ಷ

# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

– ಡಾ.ಪಿ.ವಿ, ನಾರಾಯಣ

ಅಧಿಕಾರ: ಇದೊಂದು ಸಂಸ್ಕೃತ ಶಬ್ದ. ಇದಕ್ಕೆ ಮೇಲ್ವಿಚಾರಣೆ, ಕಾರ್ಯ, ಆಧಿಪತ್ಯ, ಒಡೆತನ ಮುಂತಾದ ಅನೇಕ ಅರ್ಥಗಳಿವೆ. 'ವೇದಾಧ್ಯಯನದ ಅಧಿಕಾರ' ಎಂಬಂತಹ ಕಡೆಗಳಲ್ಲಿ ಈ ಶಬ್ದಕ್ಕೆ ಅರ್ಹತೆ, ಯೋಗ್ಯತೆ ಎಂಬ ಅರ್ಥಗಳು ಬರುತ್ತವೆ. ಗ್ರಂಥದ ಅಧ್ಯಾಯವನ್ನೂ ಇದೇ ಶಬ್ದದಿಂದ ಸೂಚಿಸುತ್ತಿದ್ದರು ("ಆಪ್ತಸ್ವರೂಪನಿರೂಪಣಂ ಪ್ರಥಮಾಧಿಕರಂ" – ಬ್ರಹ್ಮಶಿವನ 'ಸಮಯಪರೀಕ್ಷೆ'). ವ್ಯಾಕರಣ ಸೂತ್ರಕ್ಕೂ ಅಧಿಕಾರ ಎಂಬ ಹೆಸರಿದೆ.ಒಂದು ವಿಷಯದ ಬಗೆಗಿನ ನೈಪುಣ್ಯವನ್ನೂ 'ಅಧಿಕಾರ' ಎನ್ನುತ್ತಿದ್ದರು.

ಇಂಗ್ಲಿಷ್‌ನ 'ಪವರ್' ಎಂಬುದಕ್ಕೆ ಸಂವಾದಿಯಾಗಿ ಅಧಿಕಾರ ಬಳಕೆಯಲ್ಲಿದೆ.ಹಿಂದೆ ರಾಜನಿಗಿರಬೇಕಾಗಿದ್ದುದು ಇತರ ವಸ್ತುಗಳ ಜೊತೆಗೆ ಅಧಿಕಾರವು ನೃಪಲಕ್ಷಣವೆಂದು 'ಅಮರಕೋಶ'ದಲ್ಲಿ ಹೇಳಿದೆ.ಇದೇ ರಾಜ್ಯಾಧಿಕಾರ.ರಾಜನು ತನ್ನ ಅಧಿಕಾರವನ್ನು ಈಗಿನ ಸರ್ಕಾರದಂತೆಯೇ ಅಧಿಕಾರಿಗಳ ಮೂಲಕ ಚಲಾಯಿಸುತ್ತಿದ್ದ. "ಅಧಿಕಾರಿಗಳೆನೆ ಸೈರಿಸೆವು ಅಧಿಕಾರಿಗಳಾಗಿ ಬಾಳ್ಗೆ" ಎಂದು 'ಗದಾಯುದ್ಧ'ದಲ್ಲಿ ಸಹಜಾರ್ಥದ ಜೊತೆ 'ಅಧಿಕ+ಅರಿ' ಎಂಬರ್ಥ ಸೇರಿಸಿ ಶ್ಲೇಷೆ ಮಾಡಲಾಗಿದೆ.ಹಿಂದೆ ರಾಜನ ಅಧಿಕಾರವರ್ಗವನ್ನು ನಿಯೋಗವೆಂದು ಕರೆಯುತ್ತಿದ್ದರು.ರಾಜನ ಅಧಿಕಾರವರ್ಗವು ಎಪ್ಪತ್ತೆರಡು ಎಂದು ಒಂದು ಹಂತದಲ್ಲಿ ಭಾವಿಸಿ ಒಟ್ಟಾರೆ ಅದನ್ನು 'ಬಾಹತ್ತರ ನಿಯೋಗ' ಎಂಬ ಹೆಸರಿನಿಂದ ಕಾವ್ಯಗಳು ಕರೆಯುತ್ತವೆ. ಅಧಿಕಾರದ ಹೊಣೆಯನ್ನು 'ಅಧಿಕಾರಸೂತ್ರ' ಎಂದು ಕರೆಯುವ ವಾಡಿಕೆಯಿದೆ.

ಇಂಗ್ಲಿಷಿನ ಪ್ರಭಾವದಿಂದ ಅಧಿಕಾರ ಎಂಬ ಶಬ್ದನ್ನೊಳಗೊಂಡ ಅನೇಕ ಹೊಸ ಪದಗಳು ಹುಟ್ಟಿಕೊಂಡಿವೆ. ಉದಾಹರಣೆಗೆ 'ಪ್ರಾಧಿಕಾರ'.ಒಂದು ವಿಷಯದ ಬಗ್ಗೆ ಪರಮಾಧಿಕಾರ ಹೊಂದಿರುವ ಸಂಸ್ಥೆಯೇ 'ಪ್ರಾಧಿಕಾರ'; 'ಕನ್ನಡ ಅಭಿವೃದ್ಧಿ ಪ್ರಾಧಿಕಾರ', 'ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ' 'ಕನ್ನಡ ಪುಸ್ತಕ ಪ್ರಾಧಿಕಾರ' ಇಂತಹವು.ಹಾಗೆಯೇ ಇಂಗ್ಲಿಷಿನ ಎಕ್ಸ್–ಅಫ್ಷಿಷಿಯೊ ಎಂಬ ಮಾತಿಗೆ ಸಂವಾದಿಯಾಗಿ ಕನ್ನಡದಲ್ಲಿ 'ಅಧಿಕಾರನಿಮಿತ್ತ' ಎಂದೋ, 'ಪದನಿಮಿತ್ತ' ಎಂದೋ ಬಳಸುವ ರೂಢಿ ಬಂದಿದೆ. ಬ್ಯೂರೋಕ್ರಸಿ ಎಂಬುದಕ್ಕೆ 'ಅಧಿಕಾರಶಾಹಿ' ಎಂಬ ಪದ ಬಂದಿದೆ. ಅಧಿಕಾರ ಇರುವವನೇ 'ಅಧಿಕಾರಿ'.

=====

ಅನ್ನ: ಈ ಶಬ್ದವು ಸಂಸ್ಕೃತಮೂಲದ್ದು, ಆಹಾರ ಎಂಬ ಅರ್ಥವುಳ್ಳದ್ದು. "ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾತ್ ಅನ್ನಸಂಭವಃ" ಎಂಬ ಭಗವದ್ಗೀತೆಯ ಮಾತು ಸುಪ್ರಸಿದ್ಧವಾದುದು.ರನ್ನನ 'ಅಜಿತಪುರಾಣ'ದಲ್ಲಿ ಈ ಅರ್ಥದ ಪ್ರಯೋಗವಿದೆ ("ಉನ್ನತಕುಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತೆ ಪೋಗಿ ಕಾಣ್ಬನ್ನೆಗಂ ಅನ್ನಮಂ ಬಿಸುಟು"). ಊಟದ ಮನೆಯನ್ನು ಕಾವ್ಯಗಳು 'ಅನ್ನವಾಸ' ಎನ್ನುತ್ತವೆ ("ಅನ್ನವಾಸದ ಓಲಗದೊಳಿರ್ದನಾ ಹರಿಗಂ" – 'ಪಂಪಭಾರತ').ಇದಕ್ಕೆ 'ಅನ್ನವಾಸಕ' ಎಂಬ ಹೆಸರೂ ಇದೆ."ಅನ್ನದಾನಕ್ಕಿಂತ ಇನ್ನು ದಾನವು" ಇಲ್ಲ ಎಂಬ ಸರ್ವಜ್ಞನ ಮಾತಿನಂತೆ ಆಹಾರದಾನವು ಅತ್ಯಂತ ಶ್ರೇಷ್ಠ ಕಾರ್ಯ ಎನ್ನಿಸಿಕೊಂಡಿದೆ.ಇದನ್ನೇ 'ಅನ್ನದಾಸೋಹ' ಎಂದು ವಚನಕಾರರು ಕರೆಯುವುದು.ಅನ್ನದಾನ ಮಾಡುವವನೇ 'ಅನ್ನದಾನಿ'.ಉಚಿತ ಆಹಾರ ನೀಡುವ ತಾಣಗಳನ್ನು 'ಅನ್ನಸತ್ರ' 'ಅನ್ನಛತ್ರ' ಮುಂತಾದ ಮಾತುಗಳಿಂದ ಕರೆಯುತ್ತಿದ್ದರು.ಮಗುವಿಗೆ ಗಟ್ಟಿ ಆಹಾರ ನೀಡುವ 'ಅನ್ನಪ್ರಾಶನ' ಅಥವಾ 'ಅನ್ನಮುಹೂರ್ತ' ಹದಿನಾರು ಸಂಸ್ಕಾರಗಳಲ್ಲಿ ಒಂದು. "ನಾವಾ ಸುತಂಗೆ ಜಾತಕರ್ಮ ನಾಮಕರಣ ಅನ್ನಪ್ರಾಶನ ಚೌಲ ಉಪನಯನಾದಿ ಕ್ರಿಯೆಗಳಂ ಮಾಡಿ" ಎಂಬುದು ದುರ್ಗಸಿಂಹನ 'ಪಂಚತಂತ್ರ'ದ ಸಾಲು.

ಅನ್ನ ಎಂಬುದರ ಅರ್ಥ ಸಂಕುಚಿತಗೊಂಡು ಬೇಯಿಸಿದ ಅಕ್ಕಿ ಎಂಬರ್ಥವನ್ನೂ ಪಡೆಯುತ್ತದೆ.ತುಳಸಿ ಮತ್ತು ಮಾದಲದ ಎಲೆಗಳ ಕಷಾಯ ಅಥವಾ ಗೋವನ ತಿಗುಡಿನ ಬೂದಿಕದಡಿದ ನೀರಿನ ತಿಳಿಯ ಎಸರಿನಲ್ಲಿ ಮಾಡಿದ ಅನ್ನವು ಹಲವು ದಿನ ಕೆಡದೆ ಇರುತ್ತದೆ ಎಂದು ಕ್ರಿಶ. 1025 ರ ಚಾವುಂಡರಾಯನ 'ಲೋಕೋಪಕಾರಂ' ಹೇಳುತ್ತದೆ.

ತನಗೆ ತಿನ್ನಲು ಬೇಕಾದಷ್ಟಿದೆ ಎಂಬ ಅಹಂಕಾರವೇ 'ಅನ್ನಮದ'; "ಅನ್ನಮದ ಅರ್ಥಮದ ಅಖಿಲ ವೈಭವದ ಮದ" ಮುಂತಾದವುಗಳ ಪ್ರಸ್ತಾಪ ಪುರಂದರದಾಸರ ಒಂದು ಹಾಡಿನಲ್ಲಿದೆ. ಬರಿಯ ಉಂಡಮೇಲೆ ಉಂಟಾಗುವ ಆಲಸ್ಯವನ್ನೂ ಈ ಪದದಿಂದಲೇ ಸೂಚಿಸುತ್ತಾರೆ.ತನ್ನನ್ನು ಸಲಹಿದವನ ಬಗ್ಗೆ ಇರಿಸಿಕೊಳ್ಳುವ ಉಪಕಾರದ ಭಾವವೇ 'ಅನ್ನದ ಋಣ'. 'ಅನ್ನಮಯ' ಎಂಬುದು ಪಂಚಕೋಶಗಳಲ್ಲಿ ಒಂದು, ಸ್ಥೂಲ ದೇಹವನ್ನು ಸಂಕೇತಿಸವಂಥದು

**RNI: KARKAN / 2015/64049** Post office Registration No.RNP/KA/BGS/2229/2015-2017
Office of Posting: Bangalore PSO, Bangalore 560026 Price :Annual Subscription Rs. 20/- Date of Posting : 30-11-2015

## ಡಾ||ಎಂ.ಜಿ. ನಾಗರಾಜ್‌ರವರಿಗೆ "ಇತಿಹಾಸ ಸಂಸ್ಕೃತಿ ಶ್ರೀ ಪ್ರಶಸ್ತಿ"



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಕಾರ್ಯಕಾರಿ ಸಮಿತಿ ಸದಸ್ಯರಾದ ಪ್ರಸಿದ್ಧ ಇತಿಹಾಸಕಾರರೂ ಮತ್ತು ಸಂಶೋಧಕರೂ ಆದ ಡಾ||ಎಂ.ಜಿ.ನಾಗರಾಜ್‌ರವರಿಗೆ 2015ಸಾಲಿನ "ಇತಿಹಾಸ ಸಂಸ್ಕೃತಿ ಶ್ರೀ" ಎಂಬ ವಿಶಿಷ್ಟ ಪ್ರಶಸ್ತಿಯನ್ನು, ಇತಿಹಾಸ ಅಕಾದೆಮಿಯ 29ನೇ ವಾರ್ಷಿಕ ಸಮ್ಮೇಳನದಲ್ಲಿ , ದಿನಾಂಕ 29ಅಕ್ಟೋಬರ್ 2015ರಂದು ಮಂಡ್ಯದಲ್ಲಿ ಪ್ರದಾನ ಮಾಡಲಾಗುವುದು. ಬೈಸಾನಿ ರುಕ್ಮಣಮ್ಮ ರತ್ನಂಶೆಟ್ಟಿ ಸ್ಮರಣಾರ್ಥ ನೀಡುವ ಈ ಪ್ರಶಸ್ತಿಯು ನಗದು ಒಂದು ಲಕ್ಷ ರೂಪಾಯಿಗಳನ್ನೊಳಗೊಂಡಿದೆ. ತಮ್ಮ 85ನೇ ವಯಸ್ಸಿನಲ್ಲಿ ಈ ಪ್ರಶಸ್ತಿಯನ್ನು ಸ್ವೀಕರಿಸುತ್ತಿರುವ ಡಾ.ಎಂ.ಜಿ ನಾಗರಾಜ್‌ರವರಿಗೆ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಮಸ್ತ ಬಳಗ ಹೃತ್ಪೂರ್ವಕ ಅಭಿನಂದನೆಗಳನ್ನು ಅರ್ಪಿಸುತ್ತದೆ.

## 2015 ಅಕ್ಟೋಬರ್ ತಿಂಗಳಿನಲ್ಲಿ (20ರ ವರೆಗೆ) ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗವು ಸತತವಾಗಿ ಕಾರ್ಯನಿರತವಾಗಿರುತ್ತದೆ. ನಮ್ಮಲ್ಲಿರುವ ಅಪಾರ ಸಂಖ್ಯೆಯ ಹಸ್ತಪ್ರತಿಗಳಿಗೆ ಸಂಬಂಧಿಸಿದಂತೆ ಹಲವಾರು ಚಟುವಟಿಕೆಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ. 2015ರ ಅಕ್ಟೋಬರ್ ತಿಂಗಳಿನಲ್ಲಿ 3 ಗ್ರಂಥಗಳ ಶುಷ್ಕ ಶುದ್ದೀಕರಣ, 4 ಗ್ರಂಥಗಳಿಗೆ ತೈಲ ಲೇಪನ ಮತ್ತು ಮಸಿ ಲೇಪನ, 6 ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಮತ್ತು ಸ್ಕ್ಯಾನ್ ಮಾಡಲು ಸಿದ್ಧಪಡಿಸಿರುವುದು, 8 ಗ್ರಂಥಗಳಿಗೆ ಸೂಚಿಗಳನ್ನು ತಯಾರಿಸಿರುವುದು. 6 ಗ್ರಂಥಗಳಿಗೆ ಅಟ್ಟೆ ಕಟ್ಟಿರುವುದು. ಈ ಎಲ್ಲಾ ಕೆಲಸಗಳನ್ನು ಮಾಡಿದೆ.

---

## ಕೋರಿಕೆ

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ – ಆಗಿದ್ದು ಐದು ವರ್ಷಗಳ ಚಂದಾ ಹಣ ರೂ, 100/– ಮಾತ್ರ.

ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

---

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath



ಅಚ್ಚಾದ ಪುಸ್ತಕ

ತೆರೆದ–ಅಂಚೆ

ಶ್ರೀಮತಿ/ಶ್ರೀ.............................................................

.............................................................

.............................................................

ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭